# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 67
ಸದಸ್ಯರ ಹೆಸರು : ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 01.02.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020ರ ಆಯವ್ಯಯದಲ್ಲಿ ಘೋಷಿಸಿರುವಂತೆ ಈಗಾಗಲೇ ಪೂರ್ವ ಪ್ರಾಥಮಿಕ ತರಗತಿಯಿಂದ 12ನೇ ತರಗತಿವರೆಗೆ ಒಂದೇ ಸೂರಿನಡಿ ಶಿಕ್ಷಣ ನೀಡುವ ಸಲುವಾಗಿ ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭ ಮಾಡಿ ಸದರಿ ಶಾಲೆಗಳಿಗೆ ಅಗತ್ಯ ಮೂಲ ಸೌಲಭ್ಯ ಒದಗಿಸಲು 100 ಕೋಟಿ ಅನುದಾನ ಒದಗಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ) | ಬಂದಿದ್ದಲ್ಲಿ, ಪ್ರಗತಿಯ ಕಾರ್ಯ ಯಾವ ಹಂತದಲ್ಲಿದೆ; ಯಾವ ಯಾವ ಶಾಲೆಗಳಿಗೆ ಮೂಲ ಸೌಲಭ್ಯ ಒದಗಿಸಲಾಗಿದೆ; ಒದಗಿಸದಿದ್ದಲ್ಲಿ, ಕಾರಣಗಳೇನು? (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಪ್ರಥಮ ಹಂತದಲ್ಲಿ 50 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ತಲಾ ರೂ.2.00 ಕೋಟಿಯಂತೆ ಒಟ್ಟು ರೂ.100.00 ಕೋಟಿ ಮೊತ್ತದ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. (ವಿವರವನ್ನು ಅನುಬಂಧದಲ್ಲಿ ಒದಗಿಸಿದೆ) |
| ಇ) | ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು ವ್ಯಾಪ್ತಿಯಲ್ಲಿ ಎಷ್ಟು ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭಿಸಲಾಗಿದೆ; ಸದರಿ ಶಾಲೆಗಳಲ್ಲಿ ಮೂಲ ಸೌಲಭ್ಯ ಒದಗಿಸಲು ಈವರೆಗೆ ಬಿಡುಗಡೆ ಮಾಡಿರುವ | ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ನಾಗಮಂಗಲ ಪಟ್ಟಣದಲ್ಲಿ ಒಂದು ಕರ್ನಾಟಕ ಪಬ್ಲಿಕ್ ಶಾಲೆಯನ್ನು ಪ್ರಾರಂಭಿಸಲಾಗಿದೆ. |

| | | |
|---|---|---|
| | ಅನುದಾನವೆಷ್ಟು? (ತಾಲ್ಲೂಕುವಾರು ಪ್ರಗತಿ ವಿವರವನ್ನು ನೀಡುವುದು) | ಸದರಿ ಶಾಲೆಗೆ ನಿರ್ವಹಣಾ ವೆಚ್ಚಕ್ಕಾಗಿ, 2019-20 ರಲ್ಲಿ ರೂ.5.00 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. 2020-21ರಲ್ಲಿ ರೂ.5.00 ಲಕ್ಷಗಳ ಅನುದಾನ ಒದಗಿಸಿದ್ದು ಅದರಲ್ಲಿ ಮೊದಲನೇ ಮತ್ತು ಎರಡನೇ ತ್ರೈಮಾಸಿಕವಾಗಿ ರೂ.3.00 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. |

**ಇಪಿ 20 ಯೋಸಕ 2021**

(ಎಸ್.ಸುರೇಶ್ ಕುಮಾರ್)
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**



# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- 2020-21ನೇ ಸಾಲಿನಲ್ಲಿ ಕರ್ನಾಟಕ ಪಬ್ಲಿಕ್ ಶಾಲೆಗಳ ಮೂಲಭೂತ ಸೌಕರ್ಯಕ್ಕಾಗಿ ಅನುದಾನ ಒದಗಿಸುವ ಬಗ್ಗೆ.

ಓದಲಾಗಿದೆ:- 1) ದಿನಾಂಕ:05.03.2020 ರಂದು ಸನ್ಮಾನ್ಯ ಮುಖ್ಯ ಮಂತ್ರಿಯವರು ಮಂಡಿಸಿದ ಆಯವ್ಯಯ ಭಾಷಣದ ಕಂಡಿಕೆ(96).

2) ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ:13368/ಸಶಿಕ/ಕೆಪಿಎಸ್/ ಅನುದಾನ.ಸಂಬಂಧಿತ/ 2020-21, ದಿನಾಂಕ :04.07.2020.

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮಾಂಕ(1)ರಂತೆ, ಸನ್ಮಾನ್ಯ ಮುಖ್ಯ ಮಂತ್ರಿಯವರು ವಿಧಾನ ಮಂಡಲದಲ್ಲಿ ಮಂಡಿಸಿದ 2020-21ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ(96)ರಲ್ಲಿ ಈ ಕೆಳಕಂಡಂತೆ ಘೋಷಿಸಿರುತ್ತಾರೆ.

**"ಹಿಂದಿನ ವರ್ಷಗಳ ಆಯವ್ಯಯ ಘೋಷಣೆಯಂತೆ ರಾಜ್ಯದಲ್ಲಿ ಈಗಾಗಲೇ ಪೂರ್ವ ಪ್ರಾಥಮಿಕ ತರಗತಿಗಳಿಂದ ಪದವಿ ಪೂರ್ವ ತರಗತಿವರೆಗೆ ಒಂದೇ ಸೂರಿನಡಿ ಶಿಕ್ಷಣ ನೀಡಲು 276 ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭಿಸಲಾಗಿದ್ದು, ಈ ಶಾಲೆಗಳ ಮೂಲಭೂತ ಸೌಕರ್ಯಗಳಿಗಾಗಿ 100 ಕೋಟಿ ರೂ. ಅನುದಾನ ಒದಗಿಸಲಾಗುವುದು''.**

ಅದರಂತೆ, 2020-21ನೇ ಸಾಲಿನ ಆಯವ್ಯಯದಲ್ಲಿ, ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮೂಲಭೂತ ಸೌಕರ್ಯಗಳು - ಲೆಕ್ಕ ಶೀರ್ಷಿಕೆ:4202-01-201-1-06-139 (ಪ್ರಧಾನ ಕಾಮಗಾರಿಗಳು) ರಡಿ ರೂ.10000.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ(2)ರ ಪತ್ರದಲ್ಲಿ, ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು ಇವರು, ರಾಜ್ಯದಲ್ಲಿ ಈಗಾಗಲೇ ಪೂರ್ವ ಪ್ರಾಥಮಿಕ ತರಗತಿಗಳಿಂದ ಪದವಿ ಪೂರ್ವ ತರಗತಿವರೆಗೆ ಒಂದೇ ಸೂರಿನಡಿ ಶಿಕ್ಷಣ ನೀಡಲು 276 ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭಿಸಲಾಗಿದ್ದು, ಈ ಶಾಲೆಗಳ ಮೂಲಭೂತ ಸೌಕರ್ಯಗಳಿಗಾಗಿ ರೂ.100.00 ಕೋಟಿ ಅನುದಾನ ಒದಗಿಸಲಾಗುವುದು ಎಂದು 2020-21ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ, 2020-21ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ.100.00 ಕೋಟಿಗಳ ಅನುದಾನವನ್ನು ಈ ಕೆಳಕಂಡಂತೆ, ಅನುಬಂಧದಲ್ಲಿರುವ 50 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ತಲಾ ರೂ.2.00 ಕೋಟಿಗಳಂತೆ ಬಳಸಿಕೊಳ್ಳಲು ಕ್ರಿಯಾ ಯೋಜನೆಗೆ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

I/34228/2020

ಕರ್ನಾಟಕ ಪಬ್ಲಿಕ್ ಶಾಲೆಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಯ ಪ್ರಸ್ತಾಪಿತ ಅಂದಾಜು ಅನುದಾನದ ಕ್ರಿಯಾ ಯೋಜನೆ:

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ವಿವರ | ಕೊಠಡಿಗಳ ಸಂಖ್ಯೆ | ಚದರ ಮೀ. | ಘಟಕ ವೆಚ್ಚ (ಪ್ರತಿ ಕೊಠಡಿಗೆ) | ಒಟ್ಟು ಮೊತ್ತ |
|---|---|---|---|---|---|
| 1 | ಪೂರ್ವ ಪ್ರಾಥಮಿಕ ತರಗತಿ ಕೊಠಡಿಗಳು | 2 | 58.95 | 11.80 | 23.60 |
| 2 | ಪ್ರಾಥಮಿಕ ತರಗತಿ ಕೊಠಡಿಗಳು | 2 | 58.95 | 11.80 | 23.60 |
| 3 | ಪ್ರೌಢಶಾಲಾ ತರಗತಿ ಕೊಠಡಿಗಳು | 3 | 66.00 | 18.50 | 55.50 |
| 4 | ಗಣಕಯಂತ್ರ ಕೊಠಡಿ | 1 | 66.00 | 19.50 | 19.50 |
| 5 | ವಿಜ್ಞಾನ ಪ್ರಯೋಗಾಲಯ | 1 | 66.00 | 18.75 | 18.75 |
| 6 | ಗ್ರಂಥಾಲಯ | 1 | 100.00 | 24.50 | 24.50 |
| 7 | ಕಲೆ, ಕುಶಲ ಕಲೆ ಮತ್ತು ಸಾಂಸ್ಕೃತಿಕ ಕಲಾ ಕೊಠಡಿ | 1 | 66.00 | 18.50 | 18.50 |
| 8 | ಬಾಲಕ ಮತ್ತು ಬಾಲಕಿಯರಿಗೆ ಶೌಚಾಲಯ ಘಟಕ | 1 | 13.50 | 7.75 | 7.75 |
| 9 | ಕುಡಿಯುವ ನೀರಿನ ಘಟಕ | 1 | – | 1.75 | 1.75 |
| 10 | CWSN ಶೌಚಾಲಯ | 1 | 4.50 | 2.35 | 2.35 |
| 11 | Architect plan | 1 | – | 4.00 | 4.00 |
| 12 | Total Station Survey | 1 | – | 0.20 | 0.20 |
| | ಒಟ್ಟು | | | | 200.00 |

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಪಿ 136 ಯೋಸಕ 2020(ಭಾಗ-2), ಬೆಂಗಳೂರು, ದಿನಾಂಕ:08.10.2020**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನಲ್ಲಿ, ಅನುಬಂಧದಲ್ಲಿರುವ 50 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ತಲಾ ರೂ.2.00 ಕೋಟಿ ರಂತೆ ಒಟ್ಟು ರೂ.100.00 ಕೋಟಿ ಮೊತ್ತದ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಈ ಕೆಳಕಂಡ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರ ಸಂ. | ವಿವರ | ಕೊಠಡಿಗಳ ಸಂಖ್ಯೆ | ಚದರ ಮೀ. | ಘಟಕ ವೆಚ್ಚ (ಪ್ರತಿ ಕೊಠಡಿಗೆ) | ಒಟ್ಟು ಮೊತ್ತ |
|---|---|---|---|---|---|
| 1 | ಪೂರ್ವ ಪ್ರಾಥಮಿಕ ತರಗತಿ ಕೊಠಡಿಗಳು | 2 | 58.95 | 11.80 | 23.60 |
| 2 | ಪ್ರಾಥಮಿಕ ತರಗತಿ ಕೊಠಡಿಗಳು | 2 | 58.95 | 11.80 | 23.60 |
| 3 | ಪ್ರೌಢಶಾಲಾ ತರಗತಿ ಕೊಠಡಿಗಳು | 3 | 66.00 | 18.50 | 55.50 |
| 4 | ಗಣಕಯಂತ್ರ ಕೊಠಡಿ | 1 | 66.00 | 19.50 | 19.50 |
| 5 | ವಿಜ್ಞಾನ ಪ್ರಯೋಗಾಲಯ | 1 | 66.00 | 18.75 | 18.75 |
| 6 | ಗ್ರಂಥಾಲಯ | 1 | 100.00 | 24.50 | 24.50 |
| 7 | ಕಲೆ, ಕುಶಲ ಕಲೆ ಮತ್ತು ಸಾಂಸ್ಕೃತಿಕ ಕಲಾ ಕೊಠಡಿ | 1 | 66.00 | 18.50 | 18.50 |
| 8 | ಬಾಲಕ ಮತ್ತು ಬಾಲಕಿಯರಿಗೆ ಶೌಚಾಲಯ ಘಟಕ | 1 | 13.50 | 7.75 | 7.75 |
| 9 | ಕುಡಿಯುವ ನೀರಿನ ಘಟಕ | 1 | – | 1.75 | 1.75 |
| 10 | CWSN ಶೌಚಾಲಯ | 1 | 4.50 | 2.35 | 2.35 |
| 11 | Architect plan | 1 | – | 4.00 | 4.00 |
| 12 | Total Station Survey | 1 | – | 0.20 | 0.20 |
| | ಒಟ್ಟು | | | | **200.00** |

ಸದರಿ ರೂ.100.00 ಕೋಟಿಗಳ ಪೈಕಿ, ಎರಡು ತ್ರೈಮಾಸಿಕ ಕಂತಿನ ಅನುದಾನ ರೂ.50.00 ಕೋಟಿ ಮೊತ್ತವನ್ನು **2020-21ನೇ ಸಾಲಿನ ಆಯವ್ಯಯದಲ್ಲಿ, ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮೂಲಭೂತ ಸೌಕರ್ಯಗಳು - ಲೆಕ್ಕ ಶೀರ್ಷಿಕೆ:4202-01-201-1-06-139 (ಪ್ರಧಾನ ಕಾಮಗಾರಿಗಳು) ರಡಿ ಒದಗಿಸಲಾದ ಅನುದಾನದಲ್ಲಿ, ಭರಿಸಲು** ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

ಬಿಡುಗಡೆಯಾದ ಅನುದಾನಕ್ಕೆ ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು ಇವರು ಸೂಕ್ತ ಲೆಕ್ಕ ಪತ್ರಗಳನ್ನು ಇಡತಕ್ಕದ್ದು.

ಸದರಿ ಮೊತ್ತವನ್ನು ಪಾವತಿಸುವ ಸಲುವಾಗಿ ರಾಜ್ಯ ಯೋಜನಾ ನಿರ್ದೇಶಕರು. ಸಮಗ್ರ ಶಿಕ್ಷಣ ಕರ್ನಾಟಕ. ಬೆಂಗಳೂರು ಇವರು ಸಲ್ಲಿಸುವ ಜಿಲ್ಲುಗಳಿಗೆ ಖಜಾನೆಯಲ್ಲಿ ಅಪ್ ಲೋಡ್ ಮಾಡಲು ಮತ್ತು ಸದರಿ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ಸಹಾಯಾನುದಾನದ ಬಿಲ್ಲಿನಲ್ಲಿ (ಸಿ.ಟಿ.ಎಸ್.–8 ರಲ್ಲಿ) ಸೆಳೆಯಲು ಅನುಕೂಲವಾಗುವಂತೆ ಜಿಲ್ಲುಗಳಿಗೆ ಮೇಲು ಸಹಿ ಮಾಡುವ ಅಧಿಕಾರವನ್ನು ಆಯುಕ್ತರು. ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ನೀಡಿದೆ.

ಪ್ರಸ್ತುತ ರಾಜ್ಯದಲ್ಲಿ ಕೋವಿಡ್–19 ಸೋಂಕು ವ್ಯಾಪಕವಾಗಿ ಹರಡಿರುವುದರಿಂದ ಸರ್ಕಾರ ಕಾಲಕಾಲಕ್ಕೆ ಹೊರಡಿಸುವ ಸುತ್ತೋಲೆಯಲ್ಲಿ ನಿಗದಿಪಡಿಸುವ ಅಗತ್ಯ ಮುಂಜಾಗ್ರತಾ ಕ್ರಮಗಳನ್ನು ಕಡ್ಡಾಯವಾಗಿ ಪಾಲಿಸಕ್ಕದ್ದು ಹಾಗೂ ಆರ್ಥಿಕ ಮಿತವ್ಯಯ ಸಾಧಿಸಲು ಸೂಕ್ತ ಕ್ರಮವಹಿಸಕ್ಕದ್ದು.

ಒದಗಿಸಲಾದ ಅನುದಾನದ ಮಿತಿಯೊಳಗೆ ಹಾಗೂ ಯಾವುದೇ ಕಾರಣಕ್ಕೂ ಅನುದಾನ ವ್ಯಪಗತವಾಗದಂತೆ ಪ್ರಸ್ತುತ ಆರ್ಥಿಕ ಸಾಲಿನ ಅಂತ್ಯದೊಳಗೆ. ಕಾರ್ಯಕ್ರಮವನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಕ್ರಮವಹಿಸಕ್ಕದ್ದು.

ಸದರಿ ಶಾಲೆಗಳಿಂದ ಪೋಷಕರು ಮತ್ತು ಸಾರ್ವಜನಿಕರಲ್ಲಿ ಮೂಡುವ ಪರಿಣಾಮದ ಫಲಶೃತಿಯನ್ನು ಉತ್ತಮ ಸಂಶೋಧನಾ ಸಂಸ್ಥೆಯ ಮೂಲಕ ಮೌಲ್ಯಮಾಪನಗೊಳಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಕ್ಕದ್ದು.

ಸದರಿ ಕಾರ್ಯಕ್ರಮಕ್ಕೆ ಭರಿಸಲಾದ ವೆಚ್ಚದ ವಿವರಗಳನ್ನು ಕಡ್ಡಾಯವಾಗಿ ಆನ್‌ಲೈನ್ ಮೂಲಕ ಅವಲೋಕನ (NEW Digital Supportive System) ತಂತ್ರಾಂಶದಲ್ಲಿ ಇಂದೀಕರಿಸಕ್ಕದ್ದು.

ಸದರಿ ಕಾರ್ಯಕ್ರಮದಡಿಯಲ್ಲಿ ಕಾಮಗಾರಿ/ಖರೀದಿಗಳಿಗೆ ಸಂಬಂಧಿಸಿದಂತೆ ಎಲ್ಲಾ ಕಾಮಗಾರಿ/ಖರೀದಿ ನಿಯಮಗಳನ್ನು ಕರ್ನಾಟಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ಮತ್ತು ಅದರಡಿಯಲ್ಲಿ ಹೊರಡಿಸಲಾದ ನಿಯಮಗಳನ್ನು ಚಾಚೂತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಕರ್ನಾಟಕ ಪಬ್ಲಿಕ್ ಶಾಲೆಯ ಸರ್ವತೋಮುಖ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೊರಡಿಸಿರುವ ಮಾರ್ಗಸೂಚಿಯ ಅಂಶಗಳನ್ನು ಅಳವಡಿಸಿಕೊಳ್ಳತಕ್ಕದ್ದು.

ಸದರಿ ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ಪ್ರತಿ ಮಾಹೆ ಪ್ರಗತಿಯ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು, ಯೋಜನಾ ಇಲಾಖೆಯ, ಕಡತ ಸಂಖ್ಯೆ:ಇಪಿ 136 ಯೋಸಕ 2020(ಭಾಗ-i)ರ ಕಂಡಿಕೆ(5)ರಲ್ಲಿ ನೀಡಿರುವ ಸಹಮತ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 360 ವೆಚ್ಚ-8 2020, ದಿನಾಂಕ:30.09.2020ರಲ್ಲಿ ನೀಡಿರುವ ಸಹಮತ ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 02 ಟಿಎಫ್‌ಪಿ 2020 ದಿನಾಂಕ:30.05.2020 ರಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ

ಮತ್ತು ಅವರ ಹೆಸರಿನಲ್ಲಿ

08.10.2020

(ಎಸ್.ಆರ್.ಎಸ್.ನಾಥನ್)

ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ(ಯೋಜನೆ)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

ಇವರಿಗೆ:

1. ಮಹಾಲೇಖಪಾಲರು, (ಆಡಿಟ್ 1 & 2) ಕರ್ನಾಟಕ, ಬೆಂಗಳೂರು.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
3. ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು.
4. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.
5. ನಿರ್ದೇಶಕರು (ಪ್ರಾಥಮಿಕ/ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
6. ನಿರ್ದೇಶಕರು, ಖಜಾನೆ ಇಲಾಖೆ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಬೆಂಗಳೂರು.
7. ಖಜಾನಾಧಿಕಾರಿಗಳು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
8. ಉಪನಿರ್ದೇಶಕರು, ಖಜಾನಾ ಗಣಕ ಕೇಂದ್ರ, ನಂ.49, ಖನಿಜ ಭವನ, ರೇಸ್ಕೋರ್ಸ್ ರಸ್ತೆ, ಬೆಂಗಳೂರು.
9. ಸರ್ಕಾರದ ಉಪಕಾರ್ಯದರ್ಶಿ-2, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
10. ಕೋ ಆರ್ಡಿನೇಟರ್, ಮಾಹಿತಿ ಕೇಂದ್ರ, ಶಿಕ್ಷಣ ಇಲಾಖೆ, ಬೆಂಗಳೂರು.
11. ಸಾಪ್ತಾಹಿಕ ರಾಜ್ಯ ಪತ್ರ/ಶಾಖಾರಕ್ಷ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು ಶಿಕ್ಷಣ ಇಲಾಖೆ (ಪ್ರಾಥಮಿಕ & ಪ್ರೌಢ ಶಿಕ್ಷಣ) ಬಹುಮಹಡಿ ಕಟ್ಟಡ, ಬೆಂಗಳೂರು.
3. ಸರ್ಕಾರದ ಉಪಕಾರ್ಯದರ್ಶಿಗಳು ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಆಪ್ತ ಸಹಾಯಕರು, ಶಿಕ್ಷಣ ಇಲಾಖೆ, ಬೆಂಗಳೂರು.

ಸರ್ಕಾರದ ಆದೇಶ ಸಂಖ್ಯೆ:ಇಪಿ 136 ಯೋಸಕ 2020(ಭಾಗ-2) ದಿನಾಂಕ:08.10.2020

ಅನುಬಂಧ

50 ಕರ್ನಾಟಕ ಪಬ್ಲಿಕ್ ಶಾಲೆಗಳ ಪಟ್ಟಿ

| ಕ್ರಮ. ಸಂಖ್ಯೆ | ಜಿಲ್ಲೆ | ಕರ್ನಾಟಕ ಪಬ್ಲಿಕ್ ಶಾಲೆ ಹೆಸರು |
|---|---|---|
| 1 | 2 | 3 |
| 1 | ಬಾಗಲಕೋಟೆ | ಕೆ.ಪಿ.ಎಸ್ ನೀರಬೂದಿಹಾಳ |
| 2 | ಬೆಂಗಳೂರು ಉತ್ತರ | ಕೆ.ಪಿ.ಎಸ್ ಬಾಗಲೂರು |
| 3 | ಬೆಂಗಳೂರು ಉತ್ತರ | ಕೆ.ಪಿ.ಎಸ್ ಕೋಡಿಗೆಹಳ್ಳಿ |
| 4 | ಬೆಂಗಳೂರು ಗ್ರಾಮಾಂತರ ಜಿಲ್ಲೆ | ಕೆಪಿಎಸ್ ತ್ಯಾಮಗೊಂಡಲು |
| 5 | ಬೆಂಗಳೂರು ದಕ್ಷಿಣ ಜಿಲ್ಲೆ | ಕೆ.ಪಿ.ಎಸ್. ಹೊನ್ನಗನಹಟ್ಟಿ |
| 6 | ಬೆಂಗಳೂರು ದಕ್ಷಿಣ ಜಿಲ್ಲೆ | ಕೆ.ಪಿ.ಎಸ್. ಅತ್ತಿಗುಪ್ಪೆ |
| 7 | ಬೆಳಗಾವಿ | ಕೆ.ಪಿ.ಎಸ್ ಕಟಕೋಳ |
| 8 | ಬೆಳಗಾವಿ | ಕೆ.ಪಿ.ಎಸ್. ಸತ್ತಿಗೇರಿ |
| 9 | ಬಳ್ಳಾರಿ | ಕೆ.ಪಿ.ಎಸ್ ಮೋಕ |
| 10 | ಬಳ್ಳಾರಿ | ಕೆ.ಪಿ.ಎಸ್ ಎಮ್ಮಿಗನೂರು |
| 11 | ಬೀದರ | ಕೆ.ಪಿ.ಎಸ್ ಠಾಣಾಕುಶನೂರ |
| 12 | ಚಾಮರಾಜನಗರ | ಕೆ.ಪಿ.ಎಸ್ ಚಂದಕವಾಡಿ |
| 13 | ಚಾಮರಾಜನಗರ | ಕೆ.ಪಿ.ಎಸ್ ಯಳಂದೂರು |
| 14 | ಚಿಕ್ಕಬಳ್ಳಾಪುರ | ಕೆ.ಪಿ.ಎಸ್. ಡಿ.ಪಾಳ್ಯ |
| 15 | ಚಿಕ್ಕಮಗಳೂರು | ಕೆ.ಪಿ.ಎಸ್ ಬೇಲೂರು ರಸ್ತೆ, ಚಿಕ್ಕಮಗಳೂರು |
| 16 | ಚಿಕ್ಕಮಗಳೂರು | ಕೆ.ಪಿ.ಎಸ್. ಮೂಡಿಗೆರೆ |
| 17 | ಚಿತ್ರದುರ್ಗ | ಕೆ.ಪಿ.ಎಸ್ ಪರಶುರಾಂಪುರ |
| 18 | ಚಿಕ್ಕೋಡಿ | ಕೆ.ಪಿ.ಎಸ್. ಖಾನಗಾಂವ್ |
| 19 | ದಕ್ಷಿಣ ಕನ್ನಡ | ಕೆ.ಪಿ.ಎಸ್. ಪೂಂಜಾಲಕಟ್ಟೆ |
| 20 | ದಕ್ಷಿಣ ಕನ್ನಡ | ಕೆ.ಪಿ.ಎಸ್ ಬೆಳ್ಳಾರೆ |
| 21 | ದಾವಣಗೆರೆ | ಕೆ.ಪಿ.ಎಸ್ ಮಾಯಕೊಂಡ |
| 22 | ದಾವಣಗೆರೆ | ಕೆ.ಪಿ.ಎಸ್ ಸಂತೇಬೆನ್ನೂರು |
| 23 | ಧಾರವಾಡ | ಕೆ.ಪಿ.ಎಸ್. ಕರಡೀಗುಡ್ಡ |
| 24 | ಗದಗ | ಕೆ.ಪಿ.ಎಸ್ ದೋಣಿ |
| 25 | ಹಾಸನ | ಕೆ.ಪಿ.ಎಸ್. ರಾಯರಕೊಪ್ಪಲು |
| 26 | ಹಾಸನ | ಕೆ.ಪಿ.ಎಸ್ ಹಳೇಬೀಡು |
| 27 | ಹಾವೇರಿ | ಕೆ.ಪಿ.ಎಸ್ ಅರೇಮಲ್ಲಾಪುರ |
| 28 | ಕೊಡಗು | ಕೆಪಿಎಸ್ ನಾಪೋಕ್ಲು |
| 29 | ಕೋಲಾರ | ಕೆ.ಪಿ.ಎಸ್, ಬೂದಿಕೋಟೆ |
| 30 | ಕೋಲಾರ | ಕೆ.ಪಿ.ಎಸ್ ಸುಂದರಪಾಳ್ಯ |

| ಕ್ರಮ. ಸಂಖ್ಯೆ | ಜಿಲ್ಲೆ | ಕರ್ನಾಟಕ ಪಬ್ಲಿಕ್ ಶಾಲೆ ಹೆಸರು |
|---|---|---|
| 31 | ಕೊಪ್ಪಳ | ಕೆ.ಪಿ.ಎಸ್ ಹಿರೇಸಿಂದೋಗಿ |
| 32 | ಮಂಡ್ಯ | ಕೆ.ಪಿ.ಎಸ್ ಕೆ.ಆರ್.ಪೇಟೆ |
| 33 | ಮಂಡ್ಯ | ಕೆ.ಪಿ.ಎಸ್ ಕಿಕ್ಕೇರಿ |
| 34 | ಮೈಸೂರು | ಕೆ.ಪಿ.ಎಸ್ ಹಮ್ಮರಗಾಲ |
| 35 | ಮೈಸೂರು | ಕೆ.ಪಿ.ಎಸ್ ರಾವಂದೂರು |
| 36 | ರಾಯಚೂರು | ಕೆಪಿಎಸ್ ದೇವದುರ್ಗಾ |
| 37 | ರಾಯಚೂರು | ಕೆಪಿಎಸ್ ಜವಳಗೇರಾ |
| 38 | ರಾಮನಗರ | ಕೆ.ಪಿ.ಎಸ್ ಅರಳಾಳು ಸಂದ್ರ |
| 39 | ಶಿವಮೊಗ್ಗ | ಕೆಪಿಎಸ್ ಆನವಟ್ಟಿ |
| 40 | ಶಿವಮೊಗ್ಗ | ಕೆ.ಪಿ.ಎಸ್ ಶಿರಾಳಕೊಪ್ಪ |
| 41 | ತುಮಕೂರು | ಕೆ.ಪಿ.ಎಸ್ ಬೆಳ್ಳಾವಿ |
| 42 | ತುಮಕೂರು | ಕೆ.ಪಿ.ಎಸ್ ಹುಳಿಯಾರು |
| 43 | ತುಮಕೂರು ಮಧುಗಿರಿ | ಕೆ.ಪಿ.ಎಸ್ ಚಿಕ್ಕನಹಳ್ಳಿ |
| 44 | ಉಡುಪಿ | ಕೆ.ಪಿ.ಎಸ್. ಹಿರಿಯಡ್ಕ |
| 45 | ಉತ್ತರಕನ್ನಡ | ಕೆ.ಪಿ.ಎಸ್ ನೆಲ್ಲಿಕೇರಿ |
| 46 | ಉತ್ತರಕನ್ನಡ | ಕೆ.ಪಿ.ಎಸ್ ಮಂಕಿ |
| 47 | ಶಿರಸಿ | ಕೆ.ಪಿ.ಎಸ್ ಮುರ್ಕಿವಾಡ |
| 48 | ವಿಜಯಪುರ | ಕೆ.ಪಿ.ಎಸ್ ಬಾರಡೋಲ |
| 49 | ವಿಜಯಪುರ | ಕೆ.ಪಿ.ಎಸ್ ಮಮದಾಪೂರಾ |
| 50 | ಯಾದಗಿರಿ | ಕೆ.ಪಿ.ಎಸ್ ರಂಗಂಪೇಟ್ |

(ಎಸ್.ಆರ್.ವಸ್.ನಾಥನ್) 08.10.2020

ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ(ಯೋಜನೆ)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

ನಮೂನೆ-4

## 50 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರ

| ಕ್ರಮ. ಸಂಖ್ಯೆ | ಜಿಲ್ಲೆ | ಕೆ.ಪಿ.ಎಸ್ ಶಾಲೆಗಳ ಸಂಖ್ಯೆ | ಪ್ರತಿ ಶಾಲೆಗೆ ಮಂಜೂರಾಗಿರುವ ಅನುದಾನ( ರೂ. ಕೋಟಿಗಳಲ್ಲಿ) | ಮಂಜೂರಾಗಿರುವ ಒಟ್ಟು ಅನುದಾನ ( ರೂ. ಕೋಟಿಗಳಲ್ಲಿ) | ಬಿಡುಗಡೆ ಮಾಡುತ್ತಿರುವ ಎರಡು ತ್ರೈ ಮಾಸಿಕ ಕಂತಿನ ಅನುದಾನ ( ರೂ. ಕೋಟಿಗಳಲ್ಲಿ) |
|---|---|---|---|---|---|
| 1 | 2 | 3 | 4 | 5 | 6 |
| 1 | ಬಾಗಲಕೋಟೆ | 1 | 2.00 | 2.00 | 1.00 |
| 2 | ಬೆಂಗಳೂರು ಉತ್ತರ | 2 | 2.00 | 4.00 | 2.00 |
| 3 | ಬೆಂಗಳೂರು ಗ್ರಾಮಾಂತರ | 1 | 2.00 | 2.00 | 1.00 |
| 4 | ಬೆಂಗಳೂರು ದಕ್ಷಿಣ | 2 | 2.00 | 4.00 | 2.00 |
| 5 | ಬೆಳಗಾವಿ | 2 | 2.00 | 4.00 | 2.00 |
| 6 | ಬಳ್ಳಾರಿ | 2 | 2.00 | 4.00 | 2.00 |
| 7 | ಬೀದರ | 1 | 2.00 | 2.00 | 1.00 |
| 8 | ಚಾಮರಾಜನಗರ | 2 | 2.00 | 4.00 | 2.00 |
| 9 | ಚಿಕ್ಕಬಳ್ಳಾಪುರ | 1 | 2.00 | 2.00 | 1.00 |
| 10 | ಚಿಕ್ಕಮಗಳೂರು | 2 | 2.00 | 4.00 | 2.00 |
| 11 | ಚಿತ್ರದುರ್ಗ | 1 | 2.00 | 2.00 | 1.00 |
| 12 | ಚಿಕ್ಕೋಡಿ | 1 | 2.00 | 2.00 | 1.00 |
| 13 | ದಕ್ಷಿಣ ಕನ್ನಡ | 2 | 2.00 | 4.00 | 2.00 |
| 14 | ದಾವಣಗೆರೆ | 2 | 2.00 | 4.00 | 2.00 |
| 15 | ಧಾರವಾಡ | 1 | 2.00 | 2.00 | 1.00 |
| 16 | ಗದಗ | 1 | 2.00 | 2.00 | 1.00 |
| 17 | ಹಾಸನ | 2 | 2.00 | 4.00 | 2.00 |
| 18 | ಹಾವೇರಿ | 1 | 2.00 | 2.00 | 1.00 |
| 19 | ಕೊಡಗು | 1 | 2.00 | 2.00 | 1.00 |
| 20 | ಕೋಲಾರ | 2 | 2.00 | 4.00 | 2.00 |
| 21 | ಕೊಪ್ಪಳ | 1 | 2.00 | 2.00 | 1.00 |
| 22 | ಮಂಡ್ಯ | 2 | 2.00 | 4.00 | 2.00 |
| 23 | ಮೈಸೂರು | 2 | 2.00 | 4.00 | 2.00 |
| 24 | ರಾಯಚೂರು | 2 | 2.00 | 4.00 | 2.00 |
| 25 | ರಾಮನಗರ | 1 | 2.00 | 2.00 | 1.00 |
| 26 | ಶಿವಮೊಗ್ಗ | 2 | 2.00 | 4.00 | 2.00 |
| 27 | ತುಮಕೂರು | 2 | 2.00 | 4.00 | 2.00 |
| 28 | ತುಮಕೂರು ಮಧುಗಿರಿ | 1 | 2.00 | 2.00 | 1.00 |
| 29 | ಉಡುಪಿ | 1 | 2.00 | 2.00 | 1.00 |
| 30 | ಉತ್ತರಕನ್ನಡ | 2 | 2.00 | 4.00 | 2.00 |
| 31 | ಶಿರಸಿ | 1 | 2.00 | 2.00 | 1.00 |
| 32 | ವಿಜಯಪುರ | 2 | 2.00 | 4.00 | 2.00 |
| 33 | ಯಾದಗಿರಿ | 1 | 2.00 | 2.00 | 1.00 |
| | | 50 | | 100.00 | 50.00 |

ರಾಜ್ಯ ಯೋಜನಾ ನಿರ್ದೇಶಕರು
ಸಮಗ್ರ ಶಿಕ್ಷಣ ಕರ್ನಾಟಕ